ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 16ನೇ ಮಾರ್ಚ್, 2020

ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಯ ಶಾಲೆಗಳ ಖಾತೆ ದಾಖಲೆಗಳ ಬಗ್ಗೆ

ಶ್ರೀ ಎಸ್. ನಾಗರಾಜ್ (ಸಂದೇಶ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

1005 (1059) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಮತ್ತು ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಯಲ್ಲಿ ಎಷ್ಟು ಪ್ರಾಥಮಿಕ, ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಿಗೆ ನಿವೇಶನ/ಕಟ್ಟಡದ ದಾಖಲಾತಿ, ಖಾತೆ, ಕಂದಾಯದ ಪ್ರಮಾಣ ಪತ್ರಗಳು ದೊರೆಯುತ್ತಿಲ್ಲ;

(ಆ) ಈ ಶಾಲೆಗಳು ಇರುವ ಜಾಗದ ವಿಸ್ತೀರ್ಣ, ಆಟದ ಮೈದಾನದ ವಿಸ್ತೀರ್ಣ, ಚಕ್ಕುಬಂದಿ, ಖಾತೆ ಹಾಗೂ ಕಂದಾಯ ಪ್ರಮಾಣ ಪತ್ರಗಳನ್ನು ಅಧಿಕೃತವಾಗಿ ಪಡೆದುಕೊಂಡು, ಸರ್ವೆ ಮಾಡಿಸಿ, ಅತಿಕ್ರಮಣ ಇದ್ದಲ್ಲಿ ತೆರವುಗೊಳಿಸಿ ಶಾಲೆಗಳ ಜಾಗಕ್ಕೆ ಬೇಲಿ ಅಥವಾ ಕಂಪೌಂಡ್ ಹಾಕಿಸಿ ರಕ್ಷಣೆ ಮಾಡಲು ಕ್ರಮ ತೆಗೆದುಕೊಳ್ಳಲಾಗುವುದೇ; ಈ ಬಗ್ಗೆ ವಿಶೇಷ ಡ್ರೈವ್ ಒಂದನ್ನು ನಡೆಸಲು ಸೂಚಿಸಲಾಗುವುದೇ ?